# ಶಿವಾಜಿಯ-ಬಾಲ್ಯ

## (ಕಿರಿಯರ-ನಾಟಕ)



ಚಿ. ಸದಾಶಿವಯ್ಯ



ಪ್ರಕಾಶಕರು :

ಆನಂದ್ ಬ್ರದರ್ಸ್

ಬೆಂಗಳೂರು ೨.

# " ಆ ಧಾ ರ ವ ಸ್ತು "

"ದಾದಾಜಿಯು ಒಂದು ದೊಡ್ಡ ತೋಟವನ್ನು ಮಾಡಿಸಿ ಅದಕ್ಕೆ ತನ್ನ ಯಜಮಾನನ ಹೆಸರನ್ನಿಟ್ಟಿದ್ದ. ಅದರ ಒಂದು ಎಲೆಯನ್ನಾದರೂ ಸರಿ, ಕಿತ್ತವರಿಗೆ ಕಠಿಣ ಶಿಕ್ಷೆಯನ್ನು ಕೊಡುವುದಾಗಿ ಸಾರಿಸಿದ್ದ. ದಾದಾಜಿಯು ಕಟ್ಟುಕಾಯಿದೆಗಳಿಗೆ ಎಂದೂ ಮಾನ್ಯ ಮಾಡತಕ್ಕವನು. ಒಂದು ದಿನ ಅಕಸ್ಮಾತ್ತಾಗಿ ತಾನೇ ತೋಟದಲ್ಲಿ ಒಂದು ಹಣ್ಣನ್ನು ಕಿತ್ತ. ಜ್ಞಾನೋದಯವಾದ ಮೇಲೆ ತನ್ನ ಅಪರಾಧಕ್ಕಾಗಿ ಹಣ್ಣನ್ನು ಕಿತ್ತ ಆ ಕೈಯನ್ನೇ ಕಡಿಯುವುದರಲ್ಲಿದ್ದ. ಯಾರೋ ಬಂದು ತಡೆದರು. ಆದರೂ ಕಾಯಿದೆಯನ್ನು ತಲೆಯಲ್ಲಿ ಹೊತ್ತು ನಡೆಯಿಸುವ ಈತನು ಮುಂದೆ ಎಂದೆಂದಿಗೂ ತನ್ನ ಆ ಲಜ್ಜಾಹೀನವಾದ ಕೈಯು ಜನತೆಗೆ ಕಾಣದಿರಲೆಂದು ದೊಡ್ಡದೊಂದು ಕೈಚೀಲದಲ್ಲಿ ಕಟ್ಟಿರುತ್ತಿದ್ದನೆಂದು ಹಲವರೂ, ಶಿಕ್ಷೆಯಾಗಿ ಕೊರಳಿಗೊಂದು ಕಬ್ಬಿಣದ ಬಳೆಯನ್ನು ಹಾಕಿಕೊಂಡಿರುತ್ತಿದ್ದನೆಂದು ಹಲವರೂ ಹೇಳುತ್ತಾರೆ."

**ಯದುನಾಥ ಸರ್ಕಾರರ 'ಶಿವಾಜಿ'.**

# ಪಾತ್ರಗಳು



| | | |
|---|---|---|
| ೧. | ಶಿವಾಜಿ | ೧೪ ವರ್ಷದ ಬಾಲಕ |
| ೨. | ತಾನಾಜಿ | |
| ೩. | ಯೇಸಾಜಿ | ಶಿವಾಜಿಯ ಸಮವಯಸ್ಕರು. |
| ೪. | ಬಾಜಿ | |
| ೫. | ದಾದಾಜಿಕೊಂಡದೇವ | ೬೨ ವರ್ಷದ ವೃದ್ಧ ಶಿವಾಜಿಯ ರಕ್ಷಕ |
| ೬. | ದಾದಾಜಿಪಂತ್ | ೪೫ ವರ್ಷ |
| ೭. | ಲಕ್ಷ್ಮಣ್ | ೪೦ ವರ್ಷ ಷಾಜಿ ತೋಟದ ಮಾಲಿ |



## ದೃಶ್ಯ ೧

(ಬಾಲಕ ಶಿವಾಜಿಯು - ಯೇಸಾಜಿ, ಬಾಜಿ, ತಾನಾಜಿಯರೊಡಗೂಡಿ ಬರುವನು - ಕಾಡುದಾರಿ)

**ಶಿವ**—ತಾನಾಜಿ! ಎದುರಿಗೆ ಕಾಣುತ್ತಿರುವ ಆ ಕಡಿದಾದ ಗುಡ್ಡವನ್ನು ನೋಡು. ಅದರ ಮೇಲೊಂದು ಕೋಟೆಯಿದ್ದರೆ ಎಂತಹ ಶತ್ರುವಾದರೂ ಅಲ್ಲಿಗೆ ಹತ್ತಲು ಸಾಧ್ಯವೇ?

**ತಾನಾಜಿ**— ಪ್ರಭುಜೀ! ದುರ್ಗಮವಾದ ಕಾಡುಗಳಿಂದಿಡಿದ ಈ ಸಹ್ಯಾದ್ರಿಯ ಘಟ್ಟದಲ್ಲಿ ಇದಕ್ಕಿಂತಲೂ ಸುರಕ್ಷಿತವಾದ, ಉನ್ನತವಾದ ಬೆಟ್ಟಗಳಿರುವುವು. ಆದರೇನು-ತಾವು ಹೇಳಿದಂತೆ ಕೋಟೆಯನ್ನು ಕಟ್ಟಬೇಕೆಂಬಿಚ್ಛೆಯು ಷಾಜಿ ಪ್ರಭುಗಳವರಿಗಿಲ್ಲ.

**ಬಾಜಿ**—ಇಚ್ಛೆಯಿದ್ದರೂ ಕಟ್ಟಲು ಅಪ್ಪಣೆಯಿಲ್ಲ.

**ಶಿವ**—ಯಾರಪ್ಪಣೆ?

**ಬಾಜಿ**—ಬಿಜಾಪುರದ ಸುಲ್ತಾನರದು.

**ಶಿವ**—ನಮ್ಮಾ ರಾಜ್ಯದಲ್ಲಿ ಕೋಟೆ ಕಟ್ಟಲು ಯಾವುದೋ ಸುಲ್ತಾನನ ಅಪ್ಪಣೆಯೇ?

**ಬಾಜಿ**—ಇದೆಲ್ಲವೂ ಆ ಸುಲ್ತಾನರಿಗೆ ಸೇರಿದೆಯಲ್ಲ ಪ್ರಭುಜೀ.

**ಶಿವ**—ಹಾಗೆಂದರೇನು! ಸುಲ್ತಾನನು ಗುಡ್ಡ ಗುಡ್ಡಕ್ಕೂ ಬಂದು 'ಇದು ನನ್ನದೆಂ'ದು ಕುಳಿತಿರುವನೇ? ನಾವೇ ಕೈಲಾಗದೆ ಇವೆಲ್ಲ ಅವನದೆಂದು ಹೇಳಿ ನಮಸ್ಕಾರ ಮಾಡುತ್ತಿರುವೆವು...........ಇಲ್ಲ. ನಾನು ಮಾಡುವುದಿಲ್ಲ. ಎಂದೆಂದಿಗೂ ಶರಣು ಹೋಗುವುದಿಲ್ಲ. ದಾದಾಜಿಯವರ ಭೋಧನೆಯೊಂದೂ ನನಗೆ ಸರಿಹೋಗದು. ಪಾದಷಹನ ಬಳಿ ಗುಲಾಮ ಸೇನಾಪತಿಯಾಗಿರುವುದಕ್ಕಿಂತ ಈ ಕೊಂಕಣ ಸಹ್ಯಾ

ದ್ರಿಯ ನಾಡಿನಲ್ಲಿ ಒಂದು ಕಾಡುಹಕ್ಕಿಯಾಗಿ ಸ್ವತಂತ್ರವಾಗಿ ಅಲೆಯುತ್ತಿರುವುದು ಮೇಲಲ್ಲವೆ? ಗೌರವವಲ್ಲವೆ? ಹೇಳು ತಾನಾಜಿ. ನನ್ನಬಯಕೆಯು ಹೀಗಿರುವುದರಿಂದ ಸ್ನೇಹಿತರಾದ ನಿಮ್ಮಿಷ್ಟವನ್ನೂ ಕೇಳುವುದೊಳ್ಳೆಯದು.

**ತಾನಾಜಿ**-ನಾನಂತೂ ಮುಂದೆ ಬದುಕಿರುವವರೆವಿಗೂ ತಮ್ಮನ್ನು ಬಿಟ್ಟಗಲುವುದಿಲ್ಲ. ನನ್ನ ಮನೋದೇಹಗಳನ್ನೇ ನಿಮಗರ್ಪಿಸಿರುವಾಗ, ನನಗೆ ಇಷ್ಟ-ಅನಿಷ್ಟಗಳೆಲ್ಲಿರುವುವು ಪ್ರಭುಜೀ!

**ಶಿವ**—ಬಹಳ ಸಂತೋಷ! ನಿನ್ನಿಷ್ಟವೇನೂ ಬಾಜೀ?

**ಬಾಜಿ**—ತಾವು ಸ್ವತಂತ್ರ ಸಹ್ಯಾದ್ರಿಯ ಹಕ್ಕಿಯಾಗಿದ್ದರೆಮಾತ್ರ ನನ್ನ ಜೀವವನ್ನು ನಿಮಗೆ ಮೀಸಲಿಡುತ್ತೇನೆ-ಪ್ರಭುಜೀ! ಬಾದಶಹರ ಅಥವ ಸುಲ್ತಾನರ ಗಿಳಿಯಾಗುವಂತಿದ್ದರೆ........

**ಶಿವ**-ಈ ಜನ್ಮದಲ್ಲಿಲ್ಲ-ಒಳ್ಳೆಯದು ಯೇಸಾಜಿ,ನೀನೇನ ಹೇಳುವಿ?

**ಯೇಸಾಜಿ**—ನನ್ನೀಶಿರಚ್ಛೇದನವಾದ ಹೊರತೂ ನಿಮ್ಮಾ ಮೂವರನ್ನು ಬಿಟ್ಟಗಲೆನು.

**ಶಿವ**—ಬಹಳ ಒಳ್ಳೆಯದು. ಆದರೆ ನಮ್ಮಾ ಬಯಕೆಗಳು ದಾದಾಜಿಯವರಿಗೆ ತಿಳಿದಷ್ಟೂ ನೊಂದುಕೊಳ್ಳುವರು.

**ತಾನಾಜಿ**—ಅದು ಅವರ ತಪ್ಪೇ!

**ಬಾಜಿ**—ಶೂರರಾದ ದಾದಾಜಿಯವರು ಪ್ರಭುಜೀಯವರ ಆಶೆಗಳನ್ನು ಕೇಳಿ ಮೈಯುಬ್ಬಿ ಕುಣಿಯಬೇಕು.

**ಶಿವ**—ಇಲ್ಲ. ಹಾಗಿಲ್ಲ. ನಮ್ಮ ತಂದೆಯಂತೆ ನಾನೂ ಸುಲ್ತಾನನ ಬಳಿ ಒಬ್ಬ ನೌಕರನಾಗಿರಬೇಕೆಂದು ಅವರ ಇಷ್ಟ.

**ಬಾಜಿ**—ಅದು ನೆರವೇರುವುದು ಎಂದು?

**ಶಿವ**—ಇಂದಲ್ಲ ನಾಳೆ ನಮ್ಮ ಮಾವಳರ ದಂಡನ್ನು ಕೂಡಿಸಿ, ಸುಲ್ತಾನನ ಕೋಟೆಗಳನ್ನು ಹಿಡಿದು ರಣಭೇರಿಯನ್ನು ಹೊಡೆಸುವೆನಲ್ಲಾ-ಆಗ.

**ತಾನಾಜಿ**—ದಾದಾಜಿಯವರು ಸುಲ್ತಾನನಿಗೆ ಶರಣುಹೋಗಿಲ್ಲ ಪ್ರಭುಜಿ. ಷಾಜಿ ಪ್ರಭುಗಳವರ ಅವಿಚ್ಛಿನ್ನಭಕ್ತರು. ಇದು ತಮ್ಮ ತಂದೆಯವರಿಷ್ಟವೇ ಇರಬೇಕು.

**ಶಿವ**—ದಾದಾಜಿಯವರ ಸ್ವಾಮಿಭಕ್ತಿಯು ಅನೇಕವೇಳೆ ನನ್ನನ್ನು ಮೂಕಾಗಿ ಮಾಡಿರುವುದು. ಷಾಜಿಯವರ ಮಾತಿನ ರೀತಿನೀತಿಗಳನ್ನು ಕೂಡ ವಿಚಾರಿಸದೆ, ಅಕ್ಷರಶಃ ಅವರಪ್ಪಣೆಯಂತೆ ನಡೆಯತಕ್ಕವರು ಇವರು ಇಂತಃ ಶೂರರ ಬೆಂಬಲದಿಂದ ಷಾಜಿಯವರು ಸ್ವಾತಂತ್ರ್ಯದ ಗಾಳಿಯನ್ನು ಕುಡಿಯಲಿಚ್ಛಿಸಿದ್ದರೆ ಸಹ್ಯಾದ್ರಿಯ ಶ್ರೇಣಿಯಲ್ಲಿ ನೂರಾರು ಕೋಟೆಗಳು ಸ್ವಾತಂತ್ರ್ಯದ ಜಯಭೇರಿಯನ್ನು ಹೊಡೆಯುತ್ತಿದ್ದುವು.

**ಬಾಜಿ**—ಪ್ರಭುಜೀ! ತಮ್ಮಿಬ್ಬರ ಮಾತುಗಳೂ ಸತ್ಯವಾದುವು. ದಾದಾಜಿಯವರಿಗೆ ಷಾಜಿ ಪ್ರಭುಗಳವರ ಮಾತೇ ಕಟ್ಟಪ್ಪಣೆ. ಅವರ ಹೆಸರೇ ಅವರಿಗೆ ದೇವತಾಸ್ವರೂಪ. ಕೋಟೆಯ ಹೊರಗಿನ–ಆ ದೊಡ್ಡ ತೋಟಕ್ಕೆ ಮತ್ತಾವ ಹೆಸರನ್ನೂ ಇಡದೆ ‹‹ಷಾಜಿತೋಟ''ವೆಂದು ಕರೆದಿರುವುದೊಂದೇ ಸಾಕು. ಅವರ ಸ್ವಾಮಿಭಕ್ತಿಯನ್ನು ಪ್ರದರ್ಶಿಸುವುದಕ್ಕೆ.

**ಶಿವ**—ಸತ್ಯವಾದ ಮಾತು. ಆದರೆ ಸ್ವಾಮಿಯು ಹಾವಿನ ಹೆಡೆಯ ನೆರಳನ್ನು ಬಯಸುವನಾಗಿರದೆ ಬಿಸಲಿನ ಝಳವನ್ನು ಸಹಿಸುವನಾಗಿರಬೇಕು.

**ತಾನಾಜಿ**—ನಮ್ಮ ಸ್ವಾಮಿಗೂ, ದಾದಾಜಿಯವರ ಸ್ವಾಮಿಗೂ ಅದೇ ವ್ಯತ್ಯಾಸ.

**ಯೇಸಾಜಿ**—ದಾದಾಜಿಯವರ ಪುಣ್ಯಕ್ಕಿಂತ ನಮ್ಮದೇ ಹೆಚ್ಚಿನದಲ್ಲವೇ.

**ಬಾಜಿ**—ಸಂದೇಹವೇನು!

**ಶಿವ**—ಪ್ರಾಣ ಸ್ನೇಹಿತರಾದ ನಿಮ್ಮಾ ನಿಷ್ಕಪಟ ಪ್ರೇಮಕ್ಕೆ ನಾನು ಅರ್ಹನಾಗುವಂತೆ ಭವಾನಿಯು ಕರುಣಿಸಲಿ.

**ತಾನಾಜಿ**--ಜೀಜಾಬಾಯಿಯವರು ಭವಾನಿದೇವಿಯ ಮುದ್ದಿನ ಮಗಳಲ್ಲವೇ?

**ಶಿವ**—ಇಲ್ಲ ಅವರೇ ನನಗೆ ಪ್ರತ್ಯಕ್ಷ ಭವಾನಿದೇವಿ-ಒಂದು ದಿನ ಅವರು ವೀರ ಅಭಿಮನ್ಯುವಿನ ಕಥೆಯನ್ನು ಹೇಳುತ್ತಿರುವಾಗ ನಾನು ಮೈಮರೆತು ಕೇಳುತ್ತಿದ್ದೆ. ಕಥೆ ಮುಗಿದಮೇಲೆಯೂ ಕೂಡ ಭವಾನಿ ದೇವಿಯೇ ಎದುರಿಗೆ ಕೂತು 'ಅಭಿಮನ್ಯುವಿನಂತೆ' ಶೂರನಾಗು, ಎಂದು ಹೇಳುತ್ತಿದ್ದಂತೆ ಭಾಸವಾಯಿತು-ಕ್ಷಣಕಾಲ ಕಳೆದು ನನ್ನಕೆನ್ನೆಯಮೇಲೆ ಹರಿಯುತ್ತಿದ್ದ ನೀರನ್ನು ತಮ್ಮ ಅವರು ಸೆರಗಿನಿಂದ ಒರಸಿದಮೇಲೆ ಅವರು ನನ್ನ ತಾಯಿಯೆಂದು ಸ್ಮರಣೆಗೆ ಬಂದಿತು.

**ಬಾಜಿ**- ಪ್ರಭುಜೀ! ಬಿಸಿಲೇರುತ್ತಿದೆ. ಕುದುರೆಗಳು ಗುಡ್ಡಗಳ ಲ್ಲೆಲ್ಲಾ ಸುತ್ತಿ ದಣಿದಿವೆ. ಊರಿನ ಕಡೆಗೆ ಹೊರಡೋಣ.

**ಶಿವ**— ನಿಜ. ನಮಗೂ ಬಹಳ ಹಸಿವಾಗಿದೆ; ಹೊರಡೋಣ.... ದಾರಿಯಲ್ಲಿ ಆ ದಿನದಂತೆ 'ಷಾಜಿ ತೋಟಕ್ಕೆ' ನುಗ್ಗೋಣ.

**ಯೇಸಾಜಿ**—ಪ್ರಭುಜೀ ! ಈ ವಿಷಯದಲ್ಲಿ ದಾದಾಜಿಯವರ ಕಠಿಣ ವ್ರತವನ್ನು ಸ್ಮರಿಸವುದೊಳ್ಳೆಯದು. ಆ ತೋಟದಲ್ಲಿ ಯಾರೇ ಆಗಲಿ ಒಂದು ಹಣ್ಣನ್ನು ಕಿತ್ತರೂ ಅವರಿಗೆ ಬಹು ಕಠಿಣ ಶಿಕ್ಷೆಯನ್ನು ವಿಧಿಸಬೇಕೆಂದು ಅವರ ಕಟ್ಟಪ್ಪಣೆಯಲ್ಲವೇ ?

**ತಾನಾಜಿ**---ಅದೂ ಗಮನಿಸತಕ್ಕ ವಿಷಯವೇ.

**ಶಿವ**— ಭಯವಿಲ್ಲ. ಗಾವುದಗಳ ದೂರವಿರುವ ಸುಲ್ತಾನನಿಗೇ ಈ ತೋಟದ ಹಣ್ಣನ್ನು ತಿನ್ನಲು ಹಕ್ಕಿರುವಾಗ ನಮಗಿಲ್ಲವೆ? ನನ್ನಿಷ್ಟವು ಹೀಗಿರುವುದು.

**ಯೇಸಾಜಿ**---ಕೀಳುವಾಗಲೇ ಸಿಕ್ಕಿಬಿದ್ದರೆ ತೊಂದರೆಪಡಬೇಕಾ ಗುವುದು.

**ಶಿವ**—ನಾವು ಲಕ್ಷ್ಮಣನ ಕಡೆಯವರ ಕೈಗೆ ಸಿಕ್ಕಿಬೀಳುವುದೇ? ಭಯವಿಲ್ಲ, ಬನ್ನಿ.

(ಹೊರಡುವರು – ನುರೆಯಲ್ಲಿ ಕುದುರೆಗಳ ಓಟದ ಸಪ್ಪಳವು ಕೇಳಿಸುವುದು)

———

## ೨ ದೃಶ್ಯ

(ದಾದಾಜಿಯ ಮನೆ. ವೃದ್ಧ ದಾದಾಜಿಯು ದಿಂಬನ್ನು ಒರಗಿ ಕುಳಿತಿರುವನು. ಹತ್ತಿರದಲ್ಲಿ ದಾಮೋದರಪಂತನು ಕುಳಿತಿರುವನು.)

**ದಾದಾ**—ಶಿವಾಜಿಯ ಚಿಂತೆಯು ನನಗೆ ಬಹುವಾಯಿತು. ಷಾಜಿ ಪ್ರಭುಗಳು ಸಂಪಾದಿಸಿರುವ ಸುಲ್ತಾನರ ಪ್ರೀತಿಯೂ ಕೋಟೆ ಜಾಗೀರುಗಳೂ ಅವರೊಡನೆಯೇ ಮಾಯವಾಗುವುವೋ ಏನೋ. ಹುಡುಗನಲ್ಲಿ ತಂದೆಯವರ ಪೌರುಷವೆಲ್ಲವೂ ಮೂರ್ತಿಮತ್ತಾಗಿರುವುದು. ಜೀಜಾಬಾಯಿಯವರ ಅಪ್ರತಿಮ ದೈವಭಕ್ತಿಯೂ ತುಂಬಿರುವುದು. ಆದರೆ ಅವು ದುರುಪಯೋಗವಾಗುವ ಚಿಹ್ನೆಗಳು ಕಾಣುತ್ತಿವೆ.

**ದಾಮೋ**—ಈಗಿನ ಪರಿಸ್ಥಿತಿಯಲ್ಲಿ ಚಿಹ್ನೆಗಳ ಶುಭಾಶುಭಗಳನ್ನು ಗುಣಿಸುವುದು ಬಹಳ ಕಷ್ಟ. ಸ್ವತಂತ್ರ ರಾಜನಾಗಿ ಬಾಳುವ ಯೋಗವು ಶಿವಾಜಿಗಿರಬಹುದು.

**ದಾದಾ**—ಬಿಜಾಪುರದ ಸುಲ್ತಾನರನ್ನು ಧಿಕ್ಕರಿಸಿ?

**ದಾಮೋ**—ಏಕಾಗಬಾರದು?

**ದಾದಾ**—ಹಾಗಾದರೆ ಜೇಗನೆ ಡಿಳ್ಳಿಯ ಪಾದಷಹನ ಸೆರೆಯಾಳಾಗುವುದು ಖಂಡಿತ.

**ದಾಮೋ**—ಡಿಳ್ಳಿಯ ಸಮ್ರಾಟನನ್ನೂ, ಬಿಜಾಪುರದ ಸುಲ್ತಾನರನ್ನೂ ಎದುರಿಸಿ ಗೆಲ್ಲುವ ಸುಯೋಗವು ಶಿವಾಜಿಗಿರಬಹುದು.

**ದಾದಾ**—ಅದು ಕನಸು-ಅವರ ಅಪಾರ ಸೈನ್ಯದ ಮುಂದೆ?

**ದಾನೋ**— ಷಾಜಿ ಪ್ರಭುಗಳ ಸೈನ್ಯವನ್ನು ಕಳಿದರೆ ಸುಲ್ತಾನನ ಅಪಾರ ಸೈನ್ಯವು ಅರ್ಧವಾಗುವುದು.

**ದಾದಾ**—ಅದು ಸಾಧ್ಯವಾಗಿದ್ದಲ್ಲಿ ನಮ್ಮ ಪ್ರಭುಗಳೇ ಅದನ್ನು ಸಾಧಿಸುತ್ತಿದ್ದರು.

**ದಾನೋ**—ಅವರ ಯೋಗವು ಹಾಗಿಲ್ಲವೇನೋ?

**ದಾದಾ**—ನಿಮ್ಮಯೋಗ, ನಕ್ಷತ್ರಗಳು ರಾಜ್ಯವನ್ನುಕಟ್ಟಿ ಶತ್ರುಗಳನ್ನು ಗೆಲ್ಲಲಾರವು ಪಂತ್! ಅದು ಶುದ್ಧ ಮೌಢ್ಯ.

**ದಾನೋ**—ಮೌಢ್ಯವೆಂದಿಗೂ ಅಲ್ಲ. ಬೆಳೆಯುವ ಪೈರು ಮೊಳೆಯಲ್ಲೇ ಕಾಣುವುದೆಂಬಂತೆ ಶಿವಾಜಿಯು ಈ ಬಾಲ್ಯಾವಸ್ಥೆಯ ಪರಿಚಿತರ್‍ಯಾರಾದರೂ ಅವನು ಮುಂದೆ ಸ್ವತಂತ್ರ ರಾಜನಾಗಿ, ತಿರಿದುಣ್ಣುವ ಚಕ್ರವರ್ತಿಗಳನ್ನು ಮೆಟ್ಟಿ ಮೆರೆಯುವನೆಂದು ಹೇಳದಿರನು.

**ದಾದಾ**-ಅವನು ಮುಂದೇನೇನಾಗುವನೋ ಅದನ್ನು ಬಲ್ಲವರಿಲ್ಲ. ಅವನ ಕೆಚ್ಚೆದೆಯಂತೂ ಯಾರನ್ನೂ ಲಕ್ಷಿಸುವುದಿಲ್ಲವೆಂಬುದಕ್ಕೆ ಅವನು ನನ್ನನ್ನು ಧಿಕ್ಕರಿಸುತ್ತಿರುವುದೇ ಸಾಕ್ಷಿ.

**ದಾನೋ**—ದಾದಾಜಿಯವರೇ! ನೀವು ಅವನ ವಿಷಯದಲ್ಲಿ ಯಾವ ಬಗೆಯ ದುರಭಿಪ್ರಾಯವನ್ನೂ ಇಡಬೇಡಿರಿ. ಅವನು ನಿಮ್ಮ ಸಣ್ಣ ಪುಟ್ಟ ಆಜ್ಞೆಗಳನ್ನು ಮೀರಿದರೂ ಧರ್ಮದ ಕಟ್ಟಪ್ಪಣೆಯನ್ನು ಮೀರತಕ್ಕವನಲ್ಲ. ಇದಕ್ಕೆ ಇಂಥ ಪುತ್ರರತ್ನವನ್ನು ಹಡೆದಿರುವ ಆ ಜೀಜಾ ಮಾತೆಯೇ ಸಾಕ್ಷಿ.

**ದಾದಾ**—(ಯೋಚಿಸಿ) ಪಂತ್‌ಜೀ! ನಿಮ್ಮ ಮಾತಿನಲ್ಲಿ ಸತ್ಯಾಂಶವಿರಬಹುದು. ಆದರೂ ಅವನು ಸುಲ್ತಾನರನ್ನು ಧಿಕ್ಕರಿಸುವುದು, ಷಾಜಿ ಪ್ರಭುಗಳ ನುಡಿಯನ್ನೇ ನಿರ್ಲಕ್ಷ್ಯಮಾಡುವುದು, ನನ್ನ ಬೋಧೆಗೆ ಸ್ವಲ್ಪವೂ ಮನಗೊಡದೆ ಸ್ವೇಚ್ಛಾವಿಹಾರಿಯಾಗಿರುವುದು-ಇವುಗಳನ್ನು

ನೋಡಿದರೆ, ರತ್ನವಾಗಬೇಕಾದ ಬಾಲಕನು ಕೆಂಡವಾದಾನೆಂಬ ಭಯವು ತಲೆದೋರಿ ನನ್ನ ಗುಂಡಿಗೆಯನ್ನು ಹಿಂಡುವ್ರದು.

**ದಾಮೋ**—ದಾದಾಜಿ! ನಿಮ್ಮ ಮಾತು ವಿಚಿತ್ರವಾಗಿರುವುದು. ಸಾಧ್ಯವಿದ್ದಲ್ಲಿ ಷಾಜೀ ಪ್ರಭುಗಳೇ ಸ್ವತಂತ್ರ ರಾಜರಾಗಿ ಬಾಳುತ್ತಿರಲಿಲ್ಲವೇ? ಇಂಥ ಕೆಲಸವನ್ನು ಈ ಕುಮಾರನು ಮಾಡ್ಯಾನು! ಇಂದು ನಿಮಗೆ ಇವನಲ್ಲಿ ಕಂಡುಬರುತ್ತಿರುವ ಸ್ವೇಚ್ಛೆಯು ಅವನು ಮುಂದೆ ಆಳುವವನೇ ಹೊರತು ಆಳಿಸಿಕೊಳ್ಳತಕ್ಕವನಲ್ಲವೆಂಬುದನ್ನು ತೋರಿಸುವುದು.

**ದಾದಾ**—ದಾಮೋದರಪಂತ್! ಸಾಕುಮಾಡಿರಿ ನಿಮ್ಮ ಪರಾಕನ್ನು. ಪ್ರಬಲರಾದ ಮೊಗಲ್ ಸಮ್ರಾಟರನ್ನೂ ಬಿಜಾಪುರದ ಸುಲ್ತಾನರನ್ನೂ ಎದುರಿಸಿ ಒಂದು ಕ್ಷಣವಾದರೂ ಜೀವಸಹಿತ ಉಳಿಯಲು ಎಡೆಯಿಲ್ಲ.... ನಿಮಗೆ ರಾಜಕಾರ್ಯದಲ್ಲಿ ಅನುಭವಸಾಲದು. ಸಾಕಿ ಬೆಳೆಸಿದ ನನ್ನನ್ನೇ ಧಿಕ್ಕರಿಸುವನೆಂದ ಮೇಲೆ ಅವನ ವಿವೇಚನಾಶಕ್ತಿ ಎಂತಹುದು!!

**ದಾಮೋ**—ಕ್ಷಮಿಸಿರಿ ದಾದಾಜಿಯವರೇ! ತಮ್ಮ ಅವನ ಅಭಿಪ್ರಾಯಗಳು ಭಿನ್ನವಾಗಿರುವುದರಿಂದ ನಿಮಗೆ ಹಾಗೆ ತೋರಬಹುದು. ಆದರೆ ನೀವಾದರೂ ಅವನ ಅಭಿಪ್ರಾಯವನ್ನು ತಪ್ಪೆಂದು ತೋರಿಸಿದರೆ ಸರಿಯೇ ಹೊರತು, ನಮ್ಮಂತೆ ನಡೆಯಲಿಲ್ಲವೆಂಬುದನ್ನೇ ದೋಷವೆಂದು ಅಪವಾದ ಹೊರಿಸುವುದು ನ್ಯಾಯಸಮ್ಮತವಲ್ಲ.

**ದಾದಾ**—ನೀವು ಪಂಡಿತರೇಸರಿ! ಅದ್ಹೇಗೆ ನ್ಯಾಯಸಮ್ಮತವಲ್ಲ ತೋರಿಸಿರಿ? ನೋಡುವ!

**ದಾಮೋ**—ತೋರಿಸುವೆನು ಕೇಳಿರಿ.... ಪವಿತ್ರವಾದ ಋಷ್ಯಾಶ್ರಮಗಳಿಂದಲೂ, ವೇದಘೋಷಗಳಿಂದಲೂ, ಹವನ ಹೋಮಗಳ ಪವಿತ್ರ ಧೂಮದಿಂದಲೂ, ಹಕ್ಕಿಗಳ ಮಂಜುಳಸ್ವನಕ್ಕೆ ಸರಿಯಾಗಿ ತಾನವಿಟ್ಟು

ಹರಿಯುವ ಪುಣ್ಯನದಿಗಳಿಂದಲೂ ತುಂಬಿದ ತಪೋವನಗಳಿಂದ ಬೀಸಿದ ಮಂದಮಾರುತನಿಂದ ಮಂಗಳವಾಗಿದ್ದಂಥ ಭಾರತದ ಇಂದಿನ ಪರಿಸ್ಥಿತಿಯನ್ನು ನೋಡಿ.... ದಾದಾಜಿಯವರೇ! ಅಂದಿನ ವೈಭವದಚಿತ್ರವನ್ನೂ, ಇಂದು ಹೇಡಿಗಳಾಗಿ ಬಾಳುತ್ತಿರುವ ನಮ್ಮ ಅವನತಿಯ ಚಿತ್ರವನ್ನೂ ಕಣ್ಣಾರೆ ನೆನೆದು ಕಾಣಿರಿ.... ನಿಮಗೆ ಸಂಕಟವಾಗುವುದಿಲ್ಲವೆ? ಪರದೇಶೀಯರ ಪದಾಘಾತದಿಂದ ಬಡಿಯಲ್ಪಟ್ಟು ಜೀವಚ್ಛವಗಳಾಗಿ ಬಿದ್ದಿರುವ ನಾವು ಶೂರರೋ ಅಥವ ಹೇಡಿಗಳೋ? ನೀವೇ ಹೇಳಿರಿ....ಇದನ್ನು ನೀವು ತಿಳಿಯದವರಲ್ಲ....ಇಂದು ನೀವು ಅವಿಚ್ಛಿನ್ನವಾದ ಭಕ್ತಿಯಿಂದ ಷಾಷಿ ಪ್ರಭುಗಳನ್ನು ಸೇವಿಸುತ್ತಿರುವಿರಿ. ಅವರಾದರೋ ಆ ಸುಲ್ತಾನನ ಅಡಿಯಾಳು. ಅಂದಮೇಲೆ ನಿಮ್ಮ ಸೇವೆಯಾದರೂ ಗುಲಾಮತನಕ್ಕೆ ಶರಣುಹೋದುದೇ!.... ಸ್ವಲ್ಪ ವಿಚಾರಮಾಡಿರಿ. ನಾಳೆಯದಿನ ಸುಲ್ತಾನನು ನಿಮ್ಮನ್ನು ಹಿಡಿಸಿ ತನ್ನ ಸೇವೆಯನ್ನು ಮಾಡಿಸಿಕೊಳ್ಳಬಹುದಲ್ಲದೆ?

**ದಾದಾ**— ಛೇ! ಎಂತಹ ಮಾತು!! ನನ್ನ ಪ್ರಾಣಹೋದರೂ ಸರಿ-ಆ ಮ್ಲೇಚ್ಛನ ರಕ್ಷಣೆ ಬೇಡುವೆನೆ?

**ದಾವೋ**—ಅವನಾದರೂ ತನ್ನ ಬಾಹುಬಲದಿಂದ ನಿಮಗೆ ಅನಿಷ್ಟವಾದ ಇದನ್ನು ಸಾಧಿಸಿಕೊಳ್ಳಬಹುದು.

**ದಾದಾ**—ನಿಜ!

**ದಾವೋ**—ಅಂದಮೇಲೆ ನಮ್ಮಗತಿ ಏನಾಗಿದೆ!! ನಾವು ಸ್ವತಂತ್ರರಾಗಿ ಬಾಳಲು ಯತ್ನಮಾಡುವುದು ನಮ್ಮ ಕರ್ತವ್ಯವಲ್ಲವೆ? ನಮ್ಮ ಧರ್ಮವಲ್ಲವೇ?

**ದಾದಾ**—(ನಿದಾನಿಸಿ) ನಿಜ!

**ದಾವೋ**—ಇಂತಹ ಧರ್ಮಕಾರ್ಯಕ್ಕೆ ಭಂಗ ತರುವವರೇ ಧರ್ಮದ್ರೋಹ ಮಾಡಿದಂತಾಗುವುದಿಲ್ಲವೇ ?

**ದಾದಾ**—(ನಿಧಾನಿಸಿ) ನಿಜ!—ನಿಜ!

**ದಾಮೋ**—ಈಗ ನೀವೇ ಹೇಳಿರಿ ; ಶಿವಾಜಿಯನ್ನು ನೀವು ಸ್ವೇಚ್ಛಾಚಾರಿಯೆಂದೂ, ನಿಮ್ಮ ಸುಲ್ತಾನನ, ಶಾಜಿಯವರ ಮಾತನ್ನು ಮೀರುವನೆಂದೂ ದೂಷಿಸುವುದು ಧರ್ಮದ್ರೋಹವಲ್ಲವೇ ?

**ದಾದಾ**—ಪಂತ್‌ಜೀ ! ನಿಮ್ಮ ಮಾತು ನಿಜವೆಂದು ತೋರುವುದು. ಆದರೂ ನಾನು ಧರ್ಮದ್ರೋಹಿಯೆಂಬುದಂತೂ ಶುದ್ಧ ಅಸಂಬದ್ಧ

**ದಾಮೋ**- ನೀವು ಈ ವಿಷಯಗಳನ್ನು, ಪರಿಸ್ಥಿತಿಯಿಂದ ದೂರವಿದ್ದು ವಿಚಾರಮಾಡಿದರೆ ನನ್ನ ಮಾತಿನ ನಿಜಾಂಶವು ತಿಳಿಯುವುದು. ........ಇರಲಿ, ನಾನು ಭೋಜನವನ್ನು ಮುಗಿಸಿಕೊಂಡು ಬರುತ್ತೇನೆ. ಆ ವೇಳೆಗೆ ತಾವು ಜೀಜಾಬಾಯಿಯವರನ್ನು ನೋಡಿ ಬನ್ನಿರಿ.

**ದಾದಾ**— ಒಳ್ಳೆಯದು—ರಾಂ ! ರಾಂ !

**ದಾಮೋ**—ರಾಂ ! ರಾಂ !

(ಹೊರಡುವರು)

---

## ದೃಶ್ಯ ೩

(ಗುಡ್ಡಗಳ ದಾರಿ–ಶಿವಾಜಿಯೂ ತಾನಾಜಿಯೂ ಏದುತ್ತಾ ಓಡಿ ಬರುವರು.)

**ಶಿವಾ**—ತಾನಾಜೀ !

**ತಾನಾ**—ಪ್ರಭುಜೀ !

**ಶಿವಾ**—ನೀನು ಇಷ್ಟು ಬಲಿಷ್ಟನೆಂದು ನನಗೆ ತಿಳಿದಿರಲಿಲ್ಲ. ಶಹಭಾಷ್ ! ನೀನು ಯೇಸಾಜಿಯನ್ನು ಎತ್ತಿಕೊಂಡು ಓಡಿಹೋಗದಿದ್ದರೆ ಅವನಂತೂ ಕುಂಟುತ್ತಾ ಲಕ್ಷ್ಮಣನ ಕೈಗೆ ಸಿಕ್ಕಿಬಿಡುತ್ತಿದ್ದನು.

**ತಾನಾ**- ಅವನು ನನಗಿಂತಲೂ ಬಲಿಷ್ಠ. ಆದರೆ ಕುದುರೆಯು ಎಡವುತ್ತಲೇ ಅವನು ಕೆಳಗೆ ಬಿದ್ದುದರಿಂದ ಸ್ವಲ್ಪ ಪ್ರಜ್ಞೆ ತಪ್ಪಿ ಹೋಗಿದ್ದಿತು.

**ಶಿವಾ**—ಬಾಜಿಯಂತೂ ಒಳ್ಳೆ ಹೆಕ್ಕಿಯಂತೋಡುವನು. ಅವನು ಆ ಕಡಿದಾದ ಗುಡ್ಡವನ್ನು ಎಷ್ಟು ನಿರಾಯಾಸವಾಗಿ ಹತ್ತಿದನು. ನೋಡು!

**ತಾನಾ**—ಅಂತೂ ಲಕ್ಷ್ಮಣನ ಕಡೆಯುವರಿಗೆ ಬಹುವಾಗಿ ಪಣವಾಗಿರ ಬೇಕು.

**ಶಿವಾ**—ಅವರ ಪೈಕಿ ಒಬ್ಬನು ನನ್ನಮೇಲೆ ಹಾರಿದಾಗ ನಾನು ಕುಳಿತುಬಿಟ್ಟೆನಲ್ಲಾ!

**ತಾನಾ**—ಅವನು ಮುಂದಕ್ಕೆ ಬಿದ್ದು ಮಣ್ಣು ಮುಕ್ಕಿದ........

**ಶಿವಾ**—ಒಂದೆರಡು ಹಲ್ಲುಗಳನ್ನೂ ಕಳೆದುಕೊಂಡಿರಬಹುದು.

(ಒಬ್ಬರನ್ನೊಬ್ಬರಪ್ಪಿ ನಗುವರು. **ಶಿವಾಜಿಯು** ತಾನಾಜಿಯನ್ನು ದಿಟ್ಟಿಸಿ ನೋಡುವನು.)

**ಶಿವಾ**—ತಾನಾ! ಜೀಜಾಮಾತೆಯ ಕಣ್ಣುಗಳೇ ನನ್ನನ್ನು ಪ್ರೇಮ ದಿಂದ ನೋಡುತ್ತಿರುವಂತಿದೆ. ನಿನ್ನ ಪ್ರೇಮಕ್ಕೆ ನಾನು ಜೀವನವನ್ನೇ ಒಪ್ಪಿಸಿದ್ದೇನೆ. ತಮ್ಮಾ!! ಈ ಎರಡು ದೇಹಗಳಲ್ಲೂ ನನ್ನ ಒಂದೇ ಜೀವವೇ ಪ್ರತಿಬಿಂಬಿಸಿರುವುದು- (ಮತ್ತೊಮ್ಮೆ ಅಪ್ಪುವನು.)

**ತಾನಾ**—(ಆನಂದ ಭಾಷ್ಪದಿಂದ ಕೂಡಿ) ಪ್ರಭುಜೀ! ಜೀಜಾ ಮಾತೆಯು ನಾವು ಎಂದೆಂದಿಗೂ ಅಗಲದಂತೆ ಆಶೀರ್ವದಿಸಲಿ. ನಿಮ್ಮ ಸೇವೆಯೇ ನನಗೆ ಜೀವವಾಗಿರುವಂತೆ ಹರಸಲಿ.

(ದೂರದಲ್ಲಿ ಜನರ ಕೂಗಾಟವು ಕೇಳಿಬರುವುದು.)

**ಶಿವಾ**—(ತಟ್ಟನೆ ತಿರುಗಿ ನೋಡಿ) ಓಹೋ! ಲಕ್ಷ್ಮನ ಕಡೆಯ ವರು ಸೋತು ಹಿಂದಿರುಗಿದರೆಂದು ತಿಳಿದಿದ್ದೆವು. ಚೇತರಿಸಿಕೊಂಡು ಪುನಃ ಅಟ್ಟಿಬರುತ್ತಿರುವರು.

**ತಾನಾ**—ಈಗಲಾದರೂ ತಾವು ನನ್ನ ಬೇಡಿಕೆಯನ್ನು ನಡೆಯಿ ಸಿಕೊಡಿರಿ.

**ಶಿವಾ**—ಏನು ಬೇಡಿಕೆ ?

**ತಾನಾ**—ಇಲ್ಲಿಂದ ಹೊರಟು ಬಾಜಿಯನ್ನು ಸೇರುವುದು.

**ಶಿವಾ**—ನೀನು ?

**ತಾನಾ**—ಲಕ್ಷ್ಮಣನ ಕಡೆಯವರನ್ನು ತಡೆದು ನಿಲ್ಲಿಸಿರುವೆನು.

**ಶಿವಾ**- ಕೊನೆಗೆ ಅವರ ಪಾಲಾಗುವಿ.

**ತಾನಾ**- -ಹಾಗೆಂದರೇನು ಪ್ರಭುಜೀ ?

**ಶಿವಾ**- ಹಾಗೆಂದರೆ ನಿನ್ನನ್ನು ಹೆಡೆಮುರಿಕಟ್ಟಿ, ಎತ್ತಿಕೊಂಡು ಹೋಗಿ, ದಾದಾಜಿಯ ಮುಂದೆ ನಿಲ್ಲಿಸುವರು.

**ತಾನಾ**—ನಿಲ್ಲಿಸಲಿ.

**ಶಿವಾ**—ದಾದಾಜಿಯು ನಿನ್ನಿಂದ ಎಲ್ಲಾ ವಿಷಯವನ್ನು ತಿಳಿಯು ವರು.

**ತಾನಾ**- ಹೆದರಿ ಹೇಳುವಂಥ ಹೇಡಿಯು ನಾನಲ್ಲ.

**ಶಿವಾ**- ಹೇಳಿದ್ದರೆ ಶಿಕ್ಷಿಸುವರು.

**ತಾನಾ**—ಶಿಕ್ಷಿಸಲಿ.

(ಕೂಗು ಹತ್ತಿರದಲ್ಲಿ ಕೇಳಿಬರುವುದು)

**ತಾನಾ**- (ಅತ್ತಕಡೆಯೇ ನೋಡಿ) ಪ್ರಭುಜೀ! ತಾವು ಜಾಗ್ರತೆ ಯಾಗಿ ದಯಮಾಡಿರಿ.

**ಶಿವಾ**- ನನ್ನ ಜೀವವನ್ನು ಪರರಿಗೊಪ್ಪಿಸಿ ಹೋಗಲೇ- ಅದಾಗದು.

(ತಾನಾಜಿಯನ್ನಪ್ಪುವನು)

**ತಾನಾ**—(ಮೊಣಕಾಲೂರಿ ಕುಳಿತು) ಪ್ರಭುಜೀ! ನೀವು ನನ್ನ ಈ ಸಣ್ಣ ಕೋರಿಕೆಯನ್ನು ನಡೆಯಿಸಿ ಸಂತೋಷಪಡಿಸಲಾರದೆ ಹೋಪರೆ........ತಮ್ಮ........ಪ್ರೇಮದ ಮಾತುಗಳು........(ದೈನ್ಯದಿಂದ ನೋಡುವನು)

**ಶಿವಾ** ಸುಳ್ಳೆನ್ನುವಿಯೇನು?

**ತಾನಾ**—(ಶಿವಾಜಿಯ ಮೊಣಕಾಲನ್ನು ಹಿಡಿದು) ಪ್ರಭುಜೀ! ನನ್ನಪರಾಧವನ್ನು ಮನ್ನಿಸಿ- ತಾವು ದಯಮಾಡಿ.

**ಶಿವಾ**- ಅದಾಗದು ತಾನಾ! ನೀನೇ ಹೊರಡು. ನಾನು ಲಕ್ಷ್ಮಣವ ಕಡೆಯುವರನ್ನು ತಡೆಯುತ್ತೇನೆ.

**ತಾನಾ**--ನನ್ನ ಕೋರಿಕೆಯನ್ನು ನಡೆಯಿಸುವುದಿಲ್ಲವೇ ?

**ಶಿವಾ**—ಇಲ್ಲ.

**ತಾನಾ**--ಹಾಗಾದರೆ ನಿಮ್ಮ ಪ್ರೀತಿಯ ನುಡಿಗಳೆಲ್ಲಾ ಸುಳ್ಳೇ?

**ಶಿವಾ**—ಅಹದು.

**ತಾನಾ**—ಹಾಗಾದರೆ ಈ ಹೀನದೇಹಕ್ಕೆ ಈ ಪ್ರಪಂಚದಲ್ಲಿ ಎಡೆಯಿಲ್ಲ. (ಈಟಿಯನ್ನು ಹಿಡಿದು ಎದೆಗಿಟ್ಟುಕೊಳ್ಳಲಿರುವನು-ಶಿವಾಜಿಯು ತಟ್ಟನೆ ಅದನ್ನು ಕಿತ್ತು ತನ್ನ ಸೊಂಟಕ್ಕೆ ಸಿಕ್ಕಿಸಿ ತಾನಾಜಿಯನ್ನಪ್ಪಿ) ತಾನಾ! ಪ್ರಿಯ ತಮ್ಮಾ! ನನ್ನ ಮುದ್ದುಮಗುವೇ! ನಿನ್ನಿಚ್ಛೆಯಿದ್ದಂತಾಗಲೀ! ಆದರೂ ನನ್ನ ಜೀವವೇ ನಿನ್ನೊಳಗಿದೆ ಎಂದು ತಿಳೀ!

(ಕೂಗು ಬಹಳ ಹತ್ತಿರದಲ್ಲಿ ಕೇಳಿಬರುವುದು)

**ತಾನಾ**--ಪ್ರಭುಜೀ! ದಯಮಾಡಿರಿ.

**ಶಿವಾ**--(ತಾನಾಜಿಯ ತಲೆಯನ್ನು ನೇವರಿಸುತ್ತಾ) ಭಲಾ! ಭವಾನೀ ಕುಮಾರಾ! ನಿನಗೆ ಮಂಗಳರಾಗಲಿ (ಕಣ್ಮರೆಯಾಗುವನು. ತಾನಾಜಿಯು ತಟ್ಟನೆ ಹಾದಿಗೆ ಅಡ್ಡಲಾಗಿ ಮಲಗುವನು. ಲಕ್ಷ್ಮಣನು ತನ್ನವರೊಡನೆ ನುಗ್ಗಿಬರುವನು)

**ಲಕ್ಷ್ಮಣ**—ಇದ್ಯಾರು ಇಲ್ಲಿ ಅಡ್ಡ ಮಲಗಿರುವರು ?

(ಎಲ್ಲರೂ ಹೋಗಿ ನೋಡುವರು)

**ಲಕ್ಷ್ಮಣ**--ಓಹೋ! ತಾನಾಜಿಯವರು!....ಸ್ವಾಮಿಾ! ನಮ್ಮ ತೋಟಕ್ಕೆ ನುಗ್ಗಿದ ಮಿಕ್ಕವರೆಲ್ಲರೂ ಎಲ್ಲಿ?

**ತಾನಾ**—ಅವರೆಲ್ಲರೂ ಮನೆ ಸೇರಿ ನಿದ್ರಿಸುತ್ತಿರುವರು.

**ಲಕ್ಷ್ಮಣ**—ಹಾದಿ ಬಿಡಿರಿ ; ಹೋಗಿನೋಡುತ್ತೇವೆ.

**ತಾನಾ**—ಹಾದಿಬಿಡಲೊಲ್ಲೆ. ಬೇಕಾದರೆ ನನ್ನನ್ನು ತುಳಿದು ಕೊಂಡು ಹೋಗಿ.

**ಲಕ್ಷ್ಮಣ**—ಹೀಗೇಕೆ ಮಾತನಾಡುತ್ತೀರಿ. ನೀವು ಹಾದಿ ಬಿಡ ದಿದ್ದರೆ ನಿಮ್ಮನ್ನೇ ಕಟ್ಟಿ ತೆಗೆದುಕೊಂಡು ಹೋಗಿ, ದಾದಾಜಿಯವರ ಮುಂದೆ ನಿಲ್ಲಿಸಬೇಕಾಗುತ್ತದೆ.

**ತಾನಾ**—ಅವಶ್ಯಕವಾಗಿ ಮಾಡಬಹುದು.

**ಲಕ್ಷ್ಮಣ**—ಆಗಲಿ-ಹೇ! ನಿಮ್ಮ ಪೈಕಿ ಹಲವರು ಮುಂದೆ ಹೋಗಿ ಹುಡುಕಿ ನೋಡಿರಿ-ಮಿಕ್ಕವರು ಸಿಕ್ಕಬಹುದು. ಎಲ್ಲಿ ಇವರ ನ್ನೆತ್ತಿ ಕಟ್ಟಿ ಹೊತ್ತುಕೊಂಡು ಬನ್ನಿ. ಸದ್ಯ ಇವರಾದರೂ ಸಿಕ್ಕಿದುದ ರಿಂದ ದಾದಾಜಿಯವರ ಉಗ್ರಕೋಪದಿಂದ ತಪ್ಪಿಸಿಕೊಂಡದ್ದಾಯಿತ. (ಹಲವರು ತಾನಾಜಿಯನ್ನು ಕಟ್ಟಿ ಎತ್ತಿಕೊಳ್ಳುವರು. ತಾನಾ 'ಜೈ ಭವಾನಿ!' ಎಂದು ಕೂಗುವನು; ಹಲವರು ಮುಂದೆ ಓಡುವರು. ಲಕ್ಷ್ಮ ಣನು ಮಿಕ್ಕವರೊಡನೆ ಹೊರಡುವನು)

## ೪ ದೃಶ್ಯ

(ದಾದಾಜಿಯ ಮನೆಯ ಸಭಾಮಂಟಪ. ದಾದಾಜಿ, ದಾಮೋದರಪಂತ್ ಕುಳಿತುಕೊಂಡಿರುವರು)

**ದಾಮೋ**—ಜೀಜಾಬಾಯಿಯವರು ಇನ್ನು ಭೋಜನಮಾಡಿ ದಂತಿಲ್ಲ-ಪೂಜೆಯನ್ನು ಪೂರೈಸಲಿಲ್ಲವೇನು?

**ದಾದಾ**—ಪೂಜೆಯೆಲ್ಲಾ ಪೂರೈಸಿ ಆಗಲೇ ಒಂದು ಘಂಟೆಯಾ ಯಿತು? "ಬೆಳಿಗ್ಗೆ ಆರುಗಂಟೆಗೆ ಕುದುರೆಯೇರಿ ಹೋದ ಶಿವ್‌ಬಾ! ಏತಕ್ಕೆ ಇಷ್ಟು ಹೊತ್ತಾದರೂ ಬರಲಿಲ್ಲ!" ಎಂದು ಹಂಬಲಿಸುತ್ತ ಊಟ ಬಿಟ್ಟು ಕುಳಿತಿದ್ದಾರೆ.

**ದಾವೋ**—ನಾನು ಕುದುರೆಯೇರಿ ಹೋಗಿ ನೋಡಿ ಬರಲೇನು.

**ದಾದಾ**—ಬೇಡ; ನೀವೇಕೆ ಹೋಗಬೇಕು. ದಾಮಾಜಿಯನ್ನು ಕಳುಹಿಸುತ್ತೇನೆ.......(ಸದ್ದಾಗುವುದು) ಅದೇನು ಸದ್ದು? ಶಿವಾಜಿಯು ಬಂದನೇನೋ.

(ಇಬ್ಬರೂ ಆತುರದಿಂದ ನೋಡುವರು)

(ಲಕ್ಷ್ಮಣನು ತಾನಾಜಿಯನ್ನು ಕರೆದುಕೊಂಡುಬರುವನು)

**ದಾದಾ**—ಇದೇನು ಲಕ್ಷ್ಮಣ್, ಈಗ ಬಂದೆ? ತಾನಾಜಿಯು ಎಲ್ಲಿ ಸಿಕ್ಕಿದ?

**ತಾನಾ**—ದಾದಾಜಿಯವರ ಸನ್ನಿಧಿಯಲ್ಲಿ ನಾನು ಅಪರಾಧಿಯಾಗಿ ಕರೆತರಲ್ಪಟ್ಟಿದ್ದೇನೆ.

**ಲಕ್ಷ್ಮಣ**—ಹೌದು ಮಹಾಸ್ವಾಮೀ! 'ಷಾ ಜಿ ತೋ ೞ ಟ' ಕ್ಕೆ ತಾನಾಜಿಯವರೂ ಅವರ ಕಡೆಯ ಇನ್ನು ಮೂರು ಜನರೂ ನುಗ್ಗಿ ಹತ್ತಾರು ಹಣ್ಣುಗಳನ್ನು ಕಿತ್ತುಕೊಂಡು ಓಡುತ್ತಿದ್ದರು. ನಾನು ಹತ್ತು ಮಂದಿ ಕಾವಲುಗಾರರೊಡನೆ ಅವರ ಬೆನ್ನು ಹತ್ತಿದೆ. ಅವರು ಬಹು ಮುಂದಿದ್ದಾಗ ಇವರೊಬ್ಬರು ಮಟ್ಟಿಗೆ ಕಡಿದಾದ ಗುಡ್ಡದ ದಾರಿಯಲ್ಲಿ ನಿಂತು ನಮ್ಮ ಜನರನ್ನು ತಡೆದರು. ನಾವು ಎಷ್ಟು ತಳ್ಳಿದರೂ, ಹೊಡೆದರೂ ಹಾದಿಗೊಡದೆ ಅಡ್ಡಲಾಗಿ ಮಲಗಿಬಿಟ್ಟರು. ಕೊನೆಗೆ ಗುಡ್ಡವನ್ನು ಸುತ್ತಿ ಹೋಗಿ ನೋಡುವಲ್ಲಿ ಅವರು ಪರಾರಿಯಾಗಿದ್ದರು. ಇವರೊಬ್ಬರನ್ನೇ ಹಿಡಿದು ತಂದಿರುವೆ.

**ದಾದಾ**—(ಆಶ್ಚರ್ಯದಿಂದ) ತಾನಾಜೀ! 'ಷಾಜಿ' ತೋಟಕ್ಕೆ ನುಗ್ಗುವಷ್ಟು ಕೆಚ್ಚು ಬಂದಿತೇ ನಿನಗೆ?

**ತಾನಾ**—ಹಸಿವನ್ನು ತಡೆಯಲಾರದೆ ಕೆಲವು ಹಣ್ಣುಗಳನ್ನು ಕಿತ್ತೆವು.

**ದಾದಾ**—ಆ ತೋಟದ ಒಂದು ಎಲೆಯನ್ನಾದರೂ ಸರಿ

'ಪ್ರಭು'ಗಳ ಅಪ್ಪಣೆಯಿಲ್ಲದೆ ಕಿತ್ತರೆ ಅಂಥವನು ಕಠಿಣ ಶಿಕ್ಷೆಯನ್ನನುಭವಿಸಬೇಕಾಗುವುದೆಂಬುದನ್ನು ಮರೆತೆಯೋ?

**ತಾನಾ** – ಮರೆತಿಲ್ಲ! ಆ ಶಿಕ್ಷೆಯನ್ನನುಭವಿಸಲು ಸಿದ್ಧನಾಗಿರುವೆ.

**ದಾದಾ** –ತಾನಾ! ಹುಚ್ಚುಹುಡುಗ! ನೀನು ಮಾಡಿರುವ ಅಪರಾಧಕ್ಕೆ ಶಿಕ್ಷೆಯೇನೆಂದು ಗೊತ್ತೋ?

**ತಾನಾ** – ಶಿಕ್ಷೆಯು ಎಂತಹುದಾದರೂ ಸರಿ, ಸಂತೋಷದಿಂದ ಅನುಭವಿಸುತ್ತೇನೆ.

**ದಾದಾ** –ಯಾವ ನಿನ್ನ ಕೈ ಹಣ್ಣನ್ನು ಕಿತ್ತಿತೋ, ಅದನ್ನು ಕತ್ತರಿಸಿ ಹಾಕುವುದೇ ಅದಕ್ಕೆ ಶಿಕ್ಷೆ.

**ತಾನಾ** –ಸಂತೋಷದಿಂದ ಕತ್ತರಿಸಿಕೊಡುವೆನು ದಾದಾಜಿಯವರೇ!

**ದಾದಾ** –ಲಕ್ಷ್ಮಣ! ಹೊರಬಾಗಿಲನ್ನು ಭದ್ರಪಡಿಸಿ ಬಾ. (ಎದ್ದು ಹತ್ತಿರ ಹೋಗಿ ತಲೆಯನ್ನು ನೇವರಿಸುತ್ತಾ) ತಾನಾ! ನಿನ್ನ ಮೂರ್ಖತನವೆಂತಹುದು! ತೋಳನ್ನು ಕತ್ತರಿಸಿ ಕೊಡುವುದೆಂದರೇನು ಗೊತ್ತೇ?

**ತಾನಾ** –ಕತ್ತಿಯನ್ನು ಕೊಡಿ ದಾದಾಜಿಯವರೇ! ತೋರಿಸಿ ಕೊಡುತ್ತೇನೆ.

**ದಾಮೋ** – ಶುದ್ಧ ಹುಡುಗತನ-ಅಯ್ಯಾ! ಮಗೂ! ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಏನಾಗುವುದು ಗೊತ್ತೇ?

**ತಾನಾ** –ನೋವಾಗುವುದು.

**ದಾಮೋ** ನಿನ್ನ ಕೈ ಕತ್ತರಿಸಿದಾಗ ಅಂತಹ ಸಾವಿರಾರು ಮುಳ್ಳುಗಳು ಒಮ್ಮೆಲೇ ಚುಚ್ಚಿದಂತಾಗುವುದು.

**ತಾನಾ** – ರಕ್ತವೂ ಹರಿಯುವುದು.

**ದಾದಾ** –ತಾನಾ! ಯಾರಿಗೋಸ್ಕರ ನೀನು ಇಷ್ಟು ಕಷ್ಟಗಳನ್ನೂ ಲೆಕ್ಕಿಸದಿರುವೆ?

**ತಾನಾ**—ಯಾರ ಪಾದಗಳಲ್ಲಿ ನನ್ನ ಜೀವವನ್ನೇ ಮೀಸಲಾ ಗರ್ಪಿಸಿರುವೆನೋ, ಯಾರ ಸ್ಮರಣಮಾತ್ರದಿಂದ ಇಂತಹ ಕಷ್ಟಗಳು ಧೂಳಾಗುವುವೋ ಅವರಿಗಾಗಿ.

**ದಾದಾ**—ಅಂಥವನು ಯಾರು ?

**ತಾನಾ**—ಅವರ ಹೆಸರನ್ನು ಈಗ ಹೇಳಲಾರೆ.

**ದಾದಾ**—ತಾನಾ ! ನನ್ನ ಮಾತಿಗೆ ಉತ್ತರ ಕೊಡದಿದ್ದರೆ ನಿನ್ನ ಕೈ ಕತ್ತರಿಸಬೇಕಾಗುವುದು.

**ತಾನಾ**—ಉತ್ತರ ಕೊಡಲಾರೆ—ಕತ್ತರಿಸಬಹುದು.

**ದಾದಾ**—ಅಂ ! (ಗದರಿಸುವನು)

(ಹಿಂದೆ “ ನಾನೇ ! ನಾನೇ ! ತಾನಾಜಿಯ ಗೆಳೆಯ ” ಎಂದು ಕೇಳುವುದು. ಶಿವಾಜಿಯು ನುಗ್ಗಿ ಬರುವನು)

**ದಾವೋ** (ಎದ್ದು ನಮಸ್ಕರಿಸಿ) ಪ್ರಭುಜೀಯವರಿಗೆ ಜಯ ವಾಗಲಿ.

**ಶಿವ**—(ಎಲ್ಲರಿಗೂ ನಮಸ್ಕರಿಸಿ) ದಾದಾಜೀ ! ಹಣ್ಣನ್ನು ಕಿತ್ತ ವನು ತಾನಾಜಿಯಲ್ಲ, ನಾನು. ಆದುದರಿಂದ ನನ್ನ ಕೈಯನ್ನು ಕತ್ತ ರಿಸಿ ಕೊಡುವೆ.

**ದಾದಾ**—ಶಿವ್‌ಜೀ ! ಬಾಗಿಲನ್ನು ಭದ್ರಪಡಿಸಿರುವಾಗ ಹೇಗೆ ಒಳಕ್ಕೆ ಬಂದೆ ?

**ಶಿವ**—ನೆಲಮಾಳಿಗೆಯ ದ್ವಾರದಿಂದ !

**ದಾದಾ**—ನೆಲಮಾಳಿಗೆಯ ದ್ವಾರ ?

**ಶಿವ**—ಹೌದು.

**ದಾದಾ** ಅದು ನಿನಗೆ ಹೇಗೆ ಗೊತ್ತು ?

**ಶಿವ**—ನೀವು ಆ ದಿನ ಷಾಜಿಯವರಿಗೆ ಹಣವನ್ನು ಕಳುಹಿ ಸಲು ದೀಪವನ್ನು ಹಿಡಿದು ಅಲ್ಲಿಗೆ ಇಳಿದಿರಲ್ಲಾ, ಆಗ ನಿಮ್ಮ ಹಿಂದೆಯೇ ಬಂದಿದ್ದೆ.

**ದಾದಾ**—ಏನೂ? ನನ್ನ ಹಿಂದೆ ನೀನು ಬಂದಿದ್ದೆಯಾ?

**ಶಿವ**—ಹೌದು-ಒಳಗಿರುವಾಗ ದೀಪವು ಎರಡುಬಾರಿ ಆರಿ ಹೋಗಲಿಲ್ಲವೇ?

**ದಾದಾ**—ಶಿವ್‌ಬಾ! ನೀನು ಮುಂದೇನಾಗುವೆಯೋ ಹೇಳುವುದಸಾಧ್ಯ. ಆದರೆ ನನ್ನಗುಟ್ಟುಗಳು ಹೀಗೆ ಬಯಲಾದರೆ ನನ್ನ ಪ್ರಾಣಕ್ಕೇ ಅಪಾಯವಾಗಬಹುದು.

**ಶಿವ**—ನಿಮ್ಮ ಪ್ರಾಣರಕ್ಷಣೆಗೆ ನನ್ನ ಪ್ರಾಣವು ಮೀಸಲಿದೆ ದಾದಾಜಿಯವರೇ! (ಚಪ್ಪಾಳೆ ಹೊಡೆಯುವನು-ಬಾಜಿ, ಯೇಸಾಜಿ ಬರುವರು)

**ದಾದಾ**—(ಆಶ್ಚರ್ಯದಿಂದ) ಇವರೆಲ್ಲಿಂದ?

**ಶಿವ**—ತೋಟ್ಟೆಯ ಗವಾಕ್ಷಿಯಿಂದ. ದಾದಾಜೀ! ನೀವು ಅನ್ಯಾಯವಾಗಿ ತಾನಾಜಿಯ ಕೈಗಳನ್ನು ಕತ್ತರಿಸುತ್ತಿದ್ದಿರಿ. ಅದನ್ನು ತಪ್ಪಿಸಿ ನ್ಯಾಯವನ್ನು ರಕ್ಷಿಸಲು ಹೀಗೆ ಬರಬೇಕಾಯಿತು. 'ಷಾಜಿ' ತೋಟಕ್ಕೆ ನಾವು ನಾಲ್ಕು ಜನರೂ ನುಗ್ಗಿದುದರಿಂದ ನಾವು ನಾಲ್ಕು ಜನಕ್ಕೂ ಸಮನಾದ ಶಿಕ್ಷೆಯನ್ನು ವಿಧಿಸುವುದು ನ್ಯಾಯ.

**ದಾದಾ**—(ನಿಟ್ಟುಸಿರುಬಿಟ್ಟು) ಶಿವ್‌ಬಾ! ನೀವೇ ಸೇರಿ ಈ ರೀತಿ 'ಪ್ರಭು'ಗಳಪ್ಪಣೆಯನ್ನು ಮೀರುವುದು ಸರಿಯಲ್ಲ.

**ಶಿವ**—ಪ್ರಭುಗಳಪ್ಪಣೆಯಲ್ಲಿ ನ್ಯಾಯವಿರುವುದೇ?

**ದಾದಾ**—ಅದನ್ನು ವಿಮರ್ಶಿಸಲು ನಮಗೆ ಹಕ್ಕಿಲ್ಲ. ಅದರಂತೆ ನಡೆಯಬೇಕಾದುದೊಂದೇ.

**ಶಿವ**—ನಾವು ಮಾಡಿರುವುದು ನಿಮ್ಮ ನ್ಯಾಯಕ್ಕೆ ಸಮ್ಮತವಾಗದಿದ್ದಲ್ಲಿ ಅದಕ್ಕೆ ಯಾವ ಶಿಕ್ಷೆಯನ್ನು ವಿಧಿಸಿದರೂ ಸಂತೋಷದಿಂದ ಅನುಭವಿಸುವೆವು.

**ಲಕ್ಷ್ಮಣ**—ಮಹಾಸ್ವಾಮೀ! ಕಾಡು ಹಕ್ಕಿಗಳು ನುಗ್ಗಿ ತಿನ್ನು

ವಂತ ಪ್ರಭೂಜಿಯವರೂ ಒಂದೆರಡು ಹಣ್ಣು ರುಚಿನೋಡಿರುವರು. ಮಕ್ಕಳಿಗೆ ಶಿಕ್ಷೆಯೆಂದರೇನು ಗೊತ್ತಿರುವುದು?

**ಶಿವ**—ಲಕ್ಷ್ಮಣನು ಏಳೆಂಟು ಮಕ್ಕಳ ತಂದೆಯಲ್ಲವೇ! ಪಾಪ!! (ನಗುವನು)

**ಲಕ್ಷ್ಮಣ**—(ನಮಸ್ಕರಿಸಿ) ಎಲ್ಲ ಪ್ರಭುಗಳ ಮಕ್ಕಳು.

**ದಾದಾ**—ಶಿವ್‌ಬಾ! ಪ್ರಭುಗಳಪ್ಪಣೆಯನ್ನು ಮೀರುವುದು ಸಾವಿಗಿಂತಲೂ ಕೇಡಾದುದರಿಂದ ನೀವು ನಾಲ್ಕು ಜನಗಳೂ ಸರಳಶಿಕ್ಷೆಯನ್ನಾದರೂ ಅನುಭವಿಸಿ, ಮುಂದೆ ಆ ರೀತಿ ನಡೆಯದಿರಬೇಕು.

**ಬಾಜಿ**—ನಾಲ್ಕು ಜನರ ಪರವಾಗಿಯೂ ನಾನೊಬ್ಬನೇ ಶಿಕ್ಷೆಯನ್ನನುಭವಿಸುತ್ತೇನೆ.

**ತಾನಾ**—ನಾನು ಮೊದಲನೆ ಅಪರಾಧಿಯಾಗಿರುವುದರಿಂದ ಎಲ್ಲರ ಶಿಕ್ಷೆಯನ್ನು ನಾನು ಅನುಭವಿಸುತ್ತೇನೆ.

**ಶಿವ**—ಅದಾಗದು ತಾನಾಜೀ! ಎಲ್ಲರೂ ಹಂಚಿಕೊಳ್ಳೋಣ. ಆಗ ಶಿಕ್ಷೆಯು ನಾವು ತಿಂದ ಹಣ್ಣಿನಷ್ಟೇ ರುಚಿಯಾಗಿರುವುದು.

**ದಾದಾ**—ನೀವು ನಾಲ್ಕು ಜನರೂ ಸೇರಿ ತೋಟದಲ್ಲಿ ಇಪ್ಪತ್ತು ಪಾತಿಗಳನ್ನು ಅಗದೆ ಹದಮಾಡಿ ಬರತಕ್ಕದ್ದು.

**ಶಿವ**—ಬಹಳ ಒಳ್ಳೆಯದು. ಬನ್ನಿ ಎಲ್ಲರೂ-ಬಾ ಲಕ್ಷ್ಮಣಾ! (ನಾಲ್ಕು ಜನರೂ ಹೊರಡುವರು-ಲಕ್ಷ್ಮಣನು ಕತ್ತನ್ನು ತಗ್ಗಿಸಿ ಹೊರಡುವನು-ದಾದಾಜಿಯು ನಿಟ್ಟುಸಿರು ಬಿಡುವನು. ತೆರೆ ಬೀಳುವುದು)

---

## ದೃಶ್ಯ ೫

(ಜೀಜಾಬಾಯಿಯವರ ಮನೆಯ ಕೋಣೆ. ಹೊಸ್ತಿಲೆಂದೀಚೆ ಶಿವಾಜಿಯೂ, ತಾನಾಜಿಯೂ ಕೈಜೋಡಿಸಿ ನಿಂತಿರುವರು. ಒಳಗಡೆಯಿಂದ ತಂಬೂರಿಯ ನಾದವು ಕೇಳಿಬರುವುದು. ಸ್ವಲ್ಪ ಹೊತ್ತಿಗೆ ಜೀಜಾಬಾಯಿಯು ಭಕ್ತ್ಯುದ್ರೇಕದಿಂದ ಹಾಡುತ್ತಿರುವುದು ಕೇಳಿಬರುವುದು.)

ಅಂಬಾ ಶಾಂಭವಿ ಚಂದ್ರಮೌಳಿರಬಲಾ ಪರ್ಣಾ ಉಮಾ ಪಾರ್ವತಿ।
ಕಾಳೀ ಹೈಮವತಿ ಶಿವಾತ್ರಿನಯಿನಿ ಕಾತ್ಯಾಯಿನಿ ಭೈರವಿ॥
ಸಾವಿತ್ರೀ ನವಯೌವನಾ ಶುಭಕರೀ ಸಾಮ್ರಾಜ್ಯ ಲಕ್ಷ್ಮೀಪ್ರದಾ।
ಚಿದ್ರೂಪೀ ಪರ ದೇವತಾ ಭಗವತೀ ಶ್ರೀರಾಜರಾಜೇಶ್ವರಿ ॥೧॥
ಅಂಬಾ ಮೋಹಿನಿ ದೇವತಾ ತ್ರಿಭುವನೀ ಆನಂದಸಂದಾಯಿನೀ।
ವಾಣೀಪಲ್ಲವ ಪಾಣಿವೇಣು ಮುರುಳೀ ಗಾನ ಪ್ರಿಯಾ ಲೋಲಿನಿ॥
ಕಲ್ಯಾಣಿ ಉಡುರಾಜಬಿಂಬವದನಾ ಧೂಮ್ರಾಕ್ಷ ಸಂಹಾರಿಣೀ।
ಚಿದ್ರೂಪಿ ಪರದೇವತಾ ಭಗವತೀ ಶ್ರೀರಾಜರಾಜೇಶ್ವರೀ ॥೨॥
ಅಂಬಾ ಶಾಶ್ವತ ಆಗಮಾದಿವಿನುತಾ ಆರ್ಯಾಮಹಾದೇವತಾ।
ಯಾ ಬ್ರಹ್ಮಾದಿ ಪಿಪೀಲಿಕಾಂತಜನನೀ ಯಾವೈಜಗನ್ಮೋಹಿನೀ॥
ಯಾ ಪಂಚಪ್ರಣವಾದಿರೇಫಜನನೀ ಯಾಚಿತ್ಕಳಾ ಮಾಲಿನೀ।
ಚಿದ್ರೂಪೀ ಪರದೇವತಾ ಭಗವತೀ ಶ್ರೀ ರಾಜರಾಜೇಶ್ವರೀ ॥೩॥

(ಹಾಡು ಮುಗಿದ ಮೇಲೆ ಪ್ರಾರ್ಥನೆಯು ಕೇಳಿ ಬರುವುದು. ಶಿವಾಜಿಯು ಕಿವಿದೆರೆದು ಕೇಳುತ್ತಿರುವದು.)

ದೇವೀ! ಲೋಕಮಾತೆ! ನನ್ನ ಜೀವದ ಕಣ್ಣಾದ ಮುದ್ದು ಶಿವ್‌ಬಾ ನಿನ್ನ ಮಗು. ಅವನನ್ನು ನಿನ್ನ ಮಡುಲಿಗೆ ಹಾಕಿದೇನೆ. ನಿನ್ನ ಕೃಪಾಕಟಾಕ್ಷದಲ್ಲಿ ಅವನನ್ನಿರಿಸಿ ಕಾಪಾಡು. ತಾಯೇ! ಭವಾನಿ ದೇವಿಯೇ! ಆ ನನ್ನ ಮುದ್ದು ಕುವರನಿಗೆ ನನ್ನ ಮುಂದಿನಾಯುಸ್ಸನ್ನೂ ಕೊಟ್ಟು ರಕ್ಷಿಸು.

**ಶಿವಾಜಿ**—(ತಟ್ಟನೆ ಕಿವಿಗಳನ್ನು ಮುಚ್ಚಿ) ಶಿವ ಶಿವಾ!! ನಾನು ಜೀವಿಸಿರುವವರೆವಿಗೂ ನನ್ನ ಪೂಜ್ಯಮಾತೆಯು ಜೀವಂತನಾಗಿರಲಿ. ಅವಳ ತೊಡೆಯಲ್ಲಿ ಮಲಗಿ ನಿದ್ರಿಸುವ ಸುಯೋಗವು ನನ್ನ ಜೀವಿತದಲ್ಲೇ ಕೊನೆಯಾಗುವಂತಿದ್ದರೆ ನನ್ನ ಜೀವನವೂ ಅಲ್ಲಿಗೇ ಮುಗಿಯಲಿ; ದೇವೀ! ನನ್ನ ಪ್ರಾರ್ಥನೆಯುನ್ನು ನೆರವೇರಿಸು.

(ಸಾಷ್ಟಾಂಗ ನಮಸ್ಕಾರ ಮಾಡುವನು. ತಾನಾಜಿಯು ನಮಸ್ಕರಿಸುವನು)

**ತಾನಾ**—ಪ್ರಭುಜೀ! ಜೀಜಾಮಾತೆಯು ಜಗನ್ಮಾತೆಯ ಧ್ಯಾನದಲ್ಲಿ ಮೈ ಮರೆತಿರುವರು. ಅದೋ ನೋಡಿ!! (ಇಬ್ಬರೂ ಆಶ್ಚರ್ಯದಿಂದ ನೋಡುತ್ತಿರುವರು. ಇತ್ತಕಡೆಯಿಂದ ಬಾಜಿಯು ಓಡಿ ಬರುವನು)

**ಶಿವ**—ಬಾಜಿ! ಏನು ಇಷ್ಟು ತ್ವರೆಯಿಂದ ಓಡಿಬಂದಿರುವೆ?

**ಬಾಜಿ**—ಪ್ರಭುಜೀ! ಮೊನ್ನೆಯದಿನ ದಾದಾಜಿಯವರು ಷಾಜಿ ತೋಟದ ಹಣ್ಣನ್ನು ಕಿತ್ತರಲ್ಲಾ-ಆ ವಿಷಯದಲ್ಲಿ ಲಕ್ಷ್ಮಣನು ಬಂದು ದಾದಾಜಿಯವರಿಗೆ ಎಷ್ಟು ಸಮಾಧಾನ ಹೇಳಿದರೂ ಕೇಳದೆ ತಮ್ಮ ಅಪರಾಧಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದೇ ನ್ಯಾಯವೆಂದು ತೀರ್ಮಾನಿಸಿರುವಂತೆ ಪಂತ್‌ಜೀಯವರು ಈ ವಿಷಯವನ್ನು ಕೇಳಿ, ಅವರ ಬಳಿಗೆ ಹೋಗಿ ಬಹುವಾಗಿ ಹೇಳಿದರಂತೆ. ಆದರೂ ಸಫಲವಾಗಲಿಲ್ಲವಂತೆ. “ಈ ವಿಷಯವನ್ನು ಜೀಜಾಬಾಯಿಯವರಿಗೆ ತಿಳಿಸುವುದಲ್ಲದೆ, ದಾದಾಜಿಯವರು ಮಾಡಿಕೊಳ್ಳಬೇಕೆಂಬ ಪ್ರಾಯಶ್ಚಿತ್ತವನ್ನು ತ್ವರೆಯಿಂದ ಬಂದು ತಡೆಯಬೇಕೆಂದೂ, ಪ್ರಭುಜೀಯವರು ಈ ಸಂದರ್ಭದಲ್ಲಿ ಉದಾಸೀನಮನಸ್ಕರಾಗಕೂಡದೆಂದೂ ನನ್ನ ದೇಡಿ ಕೆಯಿದೆ” ಎಂದು ಹೇಳಿ ಕಳುಹಿಸಿದರು. ಅಲ್ಲಿಂದ ಕುದುರೆಯೇರಿ ಓಡಿಸುತ್ತಾ ಬಂದಿರುವೆ........

**ಶಿವಾಜಿ**—ಇದೇನು ದಾದಾಜಿಯವರ ಹುಚ್ಚು!........ಇರಲಿ ಈ ಸಣ್ಣ ವಿಷಯಕ್ಕಾಗಿ ತಾಯಿಯ ಧ್ಯಾನವನ್ನು ಭಂಗಪಡಿಸಬಾರದು. ನಾನೇ ಹೋಗಿ ನಿಂತು ದಾದಾಜಿಯವರ ಅಂಧಶ್ರದ್ಧೆಯನ್ನು ನಿವಾರಿಸುತ್ತೇನೆ. ಬನ್ನಿರಿ ಹೊರಡೋಣ!—ತಾನಾಜಿ! ಹೋಗಿ ಕುದುರೆಯನ್ನು ಕರೆದುಕೊಂಡು ಬಾ! ಆ ಮರದಡಿ ಇರುತ್ತೇವೆ.

(ಮೂವರೂ ಹೊರಡುವರು-ಒಳಗಿನಿಂದ ಮತ್ತೆ ಜೀಜಾಬಾಯಿಯವರ ಧ್ಯಾನವು ಕೇಳಿ ಬರುವುದು)

ನಮಸ್ತೇ ತ್ರೈಲೋಕಖ್ಯಾತೆ ಜಗನ್ಮಾತೆ ||ಪ||
ಅಗವಾದಿ ಮಿನುತೇಶ್ವರೀ ಭಗವತಿ ಶ್ರೀರಾಜೇಶ್ವರಿ ||ಅ ಪ||
ಶಾಂಭವೀ ಕಾತ್ಯಾಯಿನಿ ತ್ರಿಪುರಾಂತಕಿ ದಕ್ಷಾಯಿಣಿ|
ಪಾಲಯಮಾಂ ಓಂಕಾರೀ|
ಮಂಗಳಕರಿ ಯೋಗೀಶ್ವರಿ|| ||೧||

---

## ೬ ದೃಶ್ಯ

(ದಾದಾಜಿ ಕೊಂಡದೇವನೊಬ್ಬನೇ ಇರುವನು. ಮನೆಯ ಒಳಭಾಗ)

**ದಾದಾ**—ತಿನ್ನುವಾಸೆಯಿಂದ ಹಣ್ಣನ್ನು ಕಿತ್ತ ಮಕ್ಕಳಿಗೆ ಶಿಕ್ಷೆಯನ್ನು ಕೊಟ್ಟೆಯಲ್ಲಾ! ದಾದಾಜೀ! ಈಗ ನೀನೇ ಕೈಯಾರ ಹಣ್ಣನ್ನು ಕಿತ್ತಿರುವೆಯಲ್ಲಾ! ನಿನಗೆ ಯಾರು ಶಿಕ್ಷೆಯನ್ನು ವಿಧಿಸುವರು? ಯಾವ ಶಿಕ್ಷೆಯು ತಾನೇ ನಿನ್ನಂತಃ ಸ್ವಾಮಿ ದ್ರೋಹಿಗೆ ತಕ್ಕುದಾಗಿದೆ? ಸ್ವಾಮಿ ದ್ರೋಹಿ! ಸ್ವಾಮಿ ದ್ರೋಹಿ ?........ದಾದಾಜಿಯು ಸ್ವಾಮಿ ದ್ರೋಹಿ! ಸ್ವಾಮಿ ದ್ರೋಹಿ?............ದಾದಾಜಿಯು ಸ್ವಾಮಿದ್ರೋಹಿಯಾದನೆ ? ವಿಶ್ವಾಸಘಾತುಕನಾದನೆ? ಇಲ್ಲ! ಇಲ್ಲ! ದಾದಾಜಿಯು ಪ್ರಭುವಿಗಾಗಿ ಪ್ರಾಣವನ್ನೊಪ್ಪಿಸಲು ಸಿದ್ಧನಾಗಿರುವನು....ಹೌದು ಹೌದು....ಹಾಗಾದರೆ ಯಾರು ಆ ದ್ರೋಹವನ್ನು ಮಾಡಿದವರು?............ದುರ್ಬುದ್ಧಿ-ದುರ್ಬುದ್ಧಿ? ಎಲ್ಲಿರುವುದು? ಸಿಕ್ಕಿದರೆ ಅದನ್ನು ಸುಟ್ಟುಬಿಡುವೆ-ದುರ್ಬುದ್ಧಿಯೇ?........ಬಾಲಕ--ದ್ರೋಹವರಿಯದ ಮಗು--ಪ್ರಭುವಿನ ಪುತ್ರ-ಮುಂದಿನ ಸ್ವಾಮಿ ಶೂರ ಶಿವ್‌ಬಾ!........ಅಂಥವನು ಹಣ್ಣನ್ನು ಕಿತ್ತು ತಿಂದದ್ದಕ್ಕೆ ಆ ಕೋಮಲ ಕೈಗಳಿಗೆ ಮಣ್ಣು ಮುಕ್ಕಿಸಿದೆ.... ದಾದಾಜೀ! ದ್ರೋಹೀ! ನೀನೇನು ಶಿಕ್ಷೆಯನ್ನನುಭವಿಸುವಿ! ಷಾಜಿಯ ವರಪ್ಪಣೆಯನ್ನು ಮೀರಿರುವೆಯಲ್ಲಾ? ಅವರು ನಿನ್ನ ಘಾತುಕತನವನ್ನು ಕಂಡರೇನೆನ್ನುವರು!........ಷಾಜಿಯುವರು! ಪ್ರಭುಗಳು! ಸ್ವಾಮಿ!........

ಷಾಜೀ ! ಪ್ರಭುಜೀ ! (ಮೊಣಕಾಲೂರಿ ಕೂತುಕೊಳ್ಳುವನು) ನಿಮ್ಮ ದಾಸ ದಾದಾಜಿಯು ದ್ರೋಹಿಯಲ್ಲ. ಅವನ ಎದೆಯನ್ನು ಬಿಚ್ಚಿ ನಿಮ್ಮ ಪಾದದಲ್ಲಿಡಲು ಸಿದ್ಧನಾಗಿರುವನು - ಸತ್ಯವಾಗಿಯೂ ಘಾತುಕನಲ್ಲ! ಕ್ಷಮಿಸಿ! ಕ್ಷಮಿಸಿ!........ದಾದಾಜಿಯು ಹಣ್ಣನ್ನು ಕಿತ್ತ-ಪ್ರಭುಗಳಪ್ಪಣೆಯನ್ನು ಮೀರಿದ-ಅದಕ್ಕಾಗಿ ಶಿಕ್ಷೆಯನ್ನನುಭವಿಸುವನು.... ಶಿಕ್ಷೆ? ಶಿಕ್ಷೆ? ನನ್ನ ದ್ರೋಹಕ್ಕೆ ಶಿಕ್ಷೆಯಿಲ್ಲ. ಆದರೂ ಹಣ್ಣನ್ನು ಕಿತ್ತ ಈ ಹಾಳು ಕೈಯನ್ನು ಕಡಿದು ಪ್ರಭುಗಳವರಿಗೆ ಕಳುಹಿಸಿ ಕ್ಷಮಾಪಣೆ ಬೇಡುತ್ತೇನೆ........ಹೇಸಿಗೆಯ ಕೈಯ್ಯೇ! ಸ್ವಾಮಿ ದ್ರೋಹ ಮಾಡಿದ ಕೈಯೇ! ವಿಶ್ವಾಸಘಾತುಕ ಕೈಯ್ಯೇ! ಕಡಿದು ಬೀಳು! (ಈಟಿಯಿಂದ ಹೊಡೆಯಲಿರುವನು—ಅಷ್ಟರಲ್ಲೇ ಹಿಂದೆ "ಬೇಡ! ಬೇಡ! ದಾದಾಜಿ! ನಿನ್ನನ್ನು ಕ್ಷಮಿಸಿರುವೆ! ನೀನು ನಿಜವಾಗಿಯೂ ಸ್ವಾಮಿ ಭಕ್ತನು. ಇದೋ ನಿನ್ನ ಸ್ವಾಮಿಯೇ ನುಡಿಯುತ್ತಿರುವನು!" ಎಂದು ಕೇಳಿ ಬರುವುದು)

**ದಾದಾ**--(ಮೇಲೆದ್ದು ಸುತ್ತಲೂ ನೋಡಿ) ಷಾಜಿಯವರೇ! ಪ್ರಭುಗಳೇ! ಎಲ್ಲಿರುವಿರಿ ? ದಯಮಾಡಿ ದರ್ಶನ ಕೊಡಿ!! (ಸುತ್ತಲೂ ನೋಡುವನು-ಶಿವಾಜಿಯು ನುಗ್ಗಿಬರುವನು)

**ಶಿವ** ದಾದಾಜಿಯವರೇ! ಅಪ್ರತಿಯ ಸ್ವಾಮಿಭಕ್ತರು ನೀವು! ಆದರೆ ನಿಮ್ಮ ಭಕ್ತಿಯಲ್ಲಿ ಮೌಢ್ಯವಿದೆ. ಷಾಜಿಯವರಪ್ಪಣೆಯನ್ನು ನಡೆಯಿಸುವುದೇನೋ ನಿಮ್ಮ ಕರ್ತವ್ಯವೇ? ಆದರೆ ಅದನ್ನು ಅಕ್ಷರಶಃ ಪಾಲಿಸಹೋದರೆ ಎಂತಹ ಅನರ್ಥಗಳಾಗುವುವು ನೋಡಿ. ದಯಮಾಡಿ ಆ ಈಟಿಯನ್ನು ಇಲ್ಲಿಕೊಡಿ.

(ತೆಗೆದುಕೊಳ್ಳುವನು)

**ದಾದಾ**—ಷಾಜಿ ಪ್ರಭುಗಳೆಲ್ಲಿ? ಈ ಪಾಪಿಯಾದ ನನ್ನನ್ನು ಕ್ಷಮಿಸಿದೆನೆಂದು ಹೇಳಿದ್ದರಲ್ಲ.

**ಶಿವಾಜಿ**— ನಾನೇ ಷಾಜಿಯವರ ಪರವಾಗಿ ನುಡಿದವನು. ಇದರಲ್ಲಿ ತಪ್ಪಿಲ್ಲ. ಮಗನು ತಂದೆಯ ಪ್ರತಿಬಿಂಬವೆಂದೂ ಪ್ರತಿನಿಧಿಯೆಂದು ನೀವೇ ಹೇಳುತ್ತಿರಲಿಲ್ಲವೇ?

**ದಾದಾ**– (ಮೊಣಕಾಲೂರಿ) ಶಿವ್‌ಬಾ! ನನ್ನ ಅಪರಾಧವನ್ನು ಮನ್ನಿಸು. ಬಾಲಕನಾದ ನೀನು ನನ್ನ ಮುಂದಿನ ಪ್ರಭುವಾಗಿದ್ದರೂ, ನಿನ್ನ ತೋಟದ ಹಣ್ಣನ್ನು ಕಿತ್ತುದ್ದಕ್ಕೆ ಕೋಮಲವಾದ ನಿನ್ನ ಕೈಗಳ್ನ ಮಣ್ಣು ಮುಕ್ಕುವಂತೆ ಮಾಡಿದೆ-ಪಾಪಿಯಾದೆ....ದಯಮಾಡಿ ಈ ನನು ಹೇಸಿಗೆಯ ಕೈಯನ್ನು ಕಡಿದುಬಿಡು.

**ಶಿವಾ**—ನೀವು ಮಾಡಿರುವ ಅಪರಾಧವೇನು?

**ದಾದಾ**—ಪ್ರಭುಗಳಪ್ಪಣೆಯಿಲ್ಲದೆ ಹಣ್ಣನ್ನು ಕಿತ್ತುದು.

**ಶಿವ**—ಅದು ಅಪರಾಧವಲ್ಲವೆಂದು ನಾನು ಹೇಳುತ್ತೇನೆ. ದಾದಾಜಿಯವರೇ! ನೀವೇ ಯೋಚಿಸಿರಿ. ನೀವು ಇಷ್ಟು ಕಷ್ಟಪಟ್ಟು ಮಗುವಿಗಿಂತಲೂ ಹೆಚ್ಚಾಗಿ ನೋಳಿಕೊಳ್ಳುತ್ತಿರುವ ಆ ತೋಟದ ಒಂದು ಹಣ್ಣನ್ನು ತಿನ್ನಲು ನಿಮಗೆ ಹಕ್ಕಿಲ್ಲವೆ? ಅಲ್ಲಿನ ಕಾವಲುಗಾರರು ಒಂದು ಬಾರಿ ಆ ಹಣ್ಣುಗಳ ರುಚಿ ನೋಡದಿರುವರೇ? ಕಾಡು ಹಕ್ಕಿಗಳೆಲ್ಲಾ ನುಗ್ಗಿ ಸವಿದೋಡುವುವಲ್ಲಾ. ಅದು ಅಪರಾಧವೇ? ಇವೆಲ್ಲಾ ಬಹು ಸಣ್ಣ ವಿಷಯಗಳು. ಹೃದಯವು ಪರಿಶುದ್ಧವಾಗಿ, ನಮ್ಮ ಉದ್ದೇಶ್ಯವು ಧರ್ಮಮಯವಾಗಿರುವವರೆಗೂ ಹಾದಿಯಲ್ಲಿ ನಾವೆಷ್ಟು ತಪ್ಪಿ ನಡೆದರೂ ಭವಾನಿಯು ಸತ್ಯವಾಗಿಯೂ ಕ್ಷಮಿಸುವಳು. ದುರುದ್ದೇಶ್ಯವು ಒಬ್ಬನ ಮನಸ್ಸಿನಲ್ಲಿ ಮೂಡಿದೊಡನೆಯೇ ಅವನಿಂದ ದುಷ್ಕಾರ್ಯಗಳು ನಡೆಯದಿದ್ದರೂ ಅವನು ಹಾಳಾದಂತೆಯೇ ಸರಿ. ನೀವು ಈ ವಿಷಯಗಳನ್ನು ಆಲೋಚಿಸುವುದು ಒಳ್ಳೆಯದು.

**ದಾದಾ**– ಶಿವ್‌ಬಾ! ನಿನ್ನ ಮಾತುಗಳ ಸತ್ಯಾಸತ್ಯಗಳು ನನ್ನ ಸಣ್ಣ ಬುದ್ಧಿಗೆ ತಿಳಿಯದು. ಈಗ ನಾನು ಮಾಡಿರುವುದು ದ್ರೋಹ ಕಾರ್ಯ. ಅದಕ್ಕೆ ಶಿಕ್ಷೆಯನ್ನನುಭವಿಸಿಯೇ ತೀರಬೇಕು.

**ಶಿವ**—ಒಳ್ಳೆಯದು. ಜೀಜಾಬಾಯಿಯವರಿಗೆ ನಿಮ್ಮ ದ್ರೋಹಕ್ಕೆ ಶಿಕ್ಷೆಕೊಡುವ ಅಧಿಕಾರವಿದೆಯೋ ಇಲ್ಲವೋ?

**ದಾದಾ**—ಅವರ ಮಾತು ಷಾಜಿಯವರ ಮಾತಿನಷ್ಟೇ ಪವಿತ್ರವಾದುದು.

**ಶಿವ**—ಸತ್ಯವಾದ ಮಾತು. (ಚಪ್ಪಾಳೆ ಹೊಡೆಯುವನು. ತಾನಾಜಿ, ಬಾಜಿ, ಯೇಸಾಜಿ ಬಂದು ನಮಸ್ಕರಿಸುವರು.)

**ಶಿವ**—ತಾನಾಜಿ! ಜೀಜಾಬಾಯಿಯವರು ದಾದಾಜಿಯವರಿಗೆ ಕೊಟ್ಟಿರುವ ಶಿಕ್ಷೆಯೇನು? ಎಲ್ಲಿ ಅವರ ಕಾಗದವನ್ನು ಕೊಡು.

**ದಾದಾ**—(ತೆಗೆದುಕೊಂಡು ಓದುವನು) ದಾದಾಜಿಯವರೇ! ನಿಮ್ಮ ಅಪರಾಧವು ಮನ್ನಿಸುವಂಥಾದ್ದಲ್ಲ. ಅದಕ್ಕೆ ಶಿಕ್ಷೆಯಾಗಿ ನೀವು ಈ ಭವಾನಿ ಸ್ತೋತ್ರವನ್ನು ಜಪಿಸತಕ್ಕದ್ದು—ಸಾಲದು ಶಿವ್‌ಬಾ! ಜೀಜಾಬಾಯಿಯವರಪ್ಪಣೆಯಂತೆ ನಡೆಯುತ್ತೇನೆ. ಜೊತೆಗೆ ಈ ಹೇಸಿಗೆಯ ಕೈಯು ಈ ಜನ್ಮದಲ್ಲಿ ಯಾರ ಕಣ್ಣಿಗೂ ಬೀಳದಿರಲೆಂದು ಶಪಥಮಾಡುತ್ತೇನೆ.

**ಶಿವ**—ಒಳ್ಳೆಯದು—ಸ್ತೋತ್ರವನ್ನಾರಂಭಿಸಿ.

(ಎಲ್ಲರೂ ಹಾಡುವರು)

ಜಯ ಜಯ ಪರಶಿವನತೆ ।
ಖ್ಯಾತೇ । ಜಯ ಜಯ ಪರಶಿವನತೆ ॥ಪ॥
ಸುರನರಜಾಲವಿನೀತೆ ॥ಅ॥ಪ॥
ಸೂರ್ಯ ಚಂದ್ರ ಬಿಂಬಾನಲನೇತ್ರೆ ।
ಜಗನ್ಮೋಹಿನಿ ವರಶುಭಗಾತ್ರೆ ॥
ಸುರನರ ಕಿನ್ನರ ಮಂಜುಳ ಸ್ತೋತ್ರೆ ।
ಶರಣು ಶರಣು ಮೂಲೋಕ ಪವಿತ್ರೆ ॥೧॥





**ಶ್ರೀ ಸದಾಶಿವಯ್ಯ**ನವರ ಮೊದಲನೇ ನಾಟಕವಾದ "ಮೈಸೂರ ಮಾಣಿಕ್ಯ" ೧೯೩೭ರಲ್ಲಿ ಬೆಳಕಿಗೆ ಬಂದು ಅಂದಿನ ನಾಟಕ ಪ್ರೇಮಿಗಳ ಆದರಕ್ಕೆ ಪಾತ್ರವಾಗಿ ಮೆಚ್ಚುಕೆ ಪಡೆಯಿತು. ಆ ಉತ್ತೇಜನದಿಂದ ಪ್ರಾರಂಭವಾದ ಇವರ ನಾಟಕ ರಚನೆ ಇದುವರೆಗೂ ನಡೆಯುತ್ತಾ ಬಂದು, ಈ ವೇಳೆಗೆ ಸುಮಾರು ಇಪ್ಪತ್ತು ನಾಟಕಗಳನ್ನು ರಚಿಸಿ, ಆಡಿಸಿ ರಂಗಭೂಮಿಗೆ ಸೇವೆ ಸಲ್ಲಿಸಿದ್ದಾರೆ.

ಇವರ ನಾಟಕಗಳನ್ನು ಮದರಾಸು, ಬೊಂಬಾಯಿ, ಕಲ್ಕತ್ತಗಳಲ್ಲಿನ ಕನ್ನಡಿಗರು ಪ್ರೇಮದಿಂದ ಅಭಿನಯಿಸಿ ಅಲ್ಲಿ ನಾಟಕ ಪ್ರೇಮಿಗಳನ್ನು ತಣಿಸಿದ್ದಾರಲ್ಲದೆ, **ಶ್ರೀ ಸದಾಶಿವಯ್ಯ**ನವರೇ ಸ್ವತಃ ತಮ್ಮ (ಗೆಳೆಯರೊಂದಿಗೂ ಮತ್ತೂ ಯುನೈಟೆಡ್ ಆರ್ಟಿಸ್ಟರೊಂದಿಗೂ) ಧಾರವಾಡ, ಹುಬ್ಬಳ್ಳಿ, ಗದಗ್, ಬೆಂಗಳೂರು, ಚಿಕ್ಕಮಗಳೂರು, ಚನ್ನಪಟ್ಣ, ಕೋಲಾರ, ತುಮಕೂರು ಮುಂತಾದ ಸ್ಥಳಗಳಲ್ಲೆಲ್ಲಾ ತಮ್ಮ ನಾಟಕಗಳನ್ನು ಅಭಿನಯಿಸಿ ಕೀರ್ತಿಗಳಿಸಿದ್ದಾರೆ. ಇವರ ಹತ್ತಾರು ನಾಟಕಗಳು ಮದ್ರಾಸು, ಮೈಸೂರು ರೇಡಿಯೋ ಕೇಂದ್ರಗಳಿಂದ ಪ್ರಸಾರವಾಗಿವೆ; ಆಗುತ್ತಿವೆ.

ಮಕ್ಕಳ (ಕಿರಿಯರ) ನಾಟಕಗಳನ್ನು ರಚಿಸುವುದರಲ್ಲಿ ಇವರಿಗೆ ಪ್ರೇಮ. **ಶ್ರೀ ಸದಾಶಿವಯ್ಯ**ನವರು ತಮಗೆ ಸಹಜವಾದ ಲಲಿತ ಶೈಲಿಯಲ್ಲಿ ಅನೇಕ ಚಿಕ್ಕ ದೃಶ್ಯಗಳನ್ನು ಬರೆದು ಬಾಲಕ ವರ್ಗಕ್ಕೆ ಉಪಕಾರ ಮಾಡಿದ್ದಾರೆ.